# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 229 (1802) |
| 2 | ಸದಸ್ಯರ ಹೆಸರು | : | ಶ್ರೀ. ಅರವಿಂದ ಕುಮಾರ್ ಅರಳಿ<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| 3 | ಉತ್ತರಿಸಬೇಕಾದ ದಿನಾಂಕ | : | 15-03-2022 |
| 4 | ಉತ್ತರಿಸುವ ಸಚಿವರು | : | ನಗರಾಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ) | ಬೀದರ್ ನಗರದ ನಿವಾಸಿಗಳಿಗೆ ಸಮರ್ಪಕವಾಗಿ ಕುಡಿಯುವ ನೀರನ್ನು ಪೂರೈಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಏಷ್ಯಿನ್ ಅಭಿವೃದ್ಧಿ ಬ್ಯಾಂಕ್ (ಎಡಿಬಿ) ನೆರವಿನ ಉತ್ತರ ಕರ್ನಾಟಕ ನಗರ ವಲಯ ಬಂಡವಾಳ ಹೂಡಿಕಾ ಕಾರ್ಯಕ್ರಮ (ಎನ್‌ಕೆಯುಎಸ್‌ಐಪಿ) ದಡಿ ಬೀದರ್ ನಗರಕ್ಕೆ ವಿನ್ಯಾಸದಂತೆ 44 ಎಂಎಲ್‌ಡಿ ಸಗಟು ನೀರು ಸರಬರಾಜು (2031 ರ ಜನಸಂಖ್ಯೆಯ ಬೇಡಿಕೆಗೆ) ಅವಶ್ಯಕತೆ ಇರುತ್ತದೆ. ಮುಂಚೆ ಇದ್ದ ಮಾಂಜ್ರಾ ಜಲಾಶಯದ 16 ಎಂಎಲ್‌ಡಿ ನೀರಿನ ಮೂಲವನ್ನು ಪರಿಗಣಿಸಿ ಉಳಿದ 28 ಎಂಎಲ್‌ಡಿ ನೀರಿನ ಬೇಡಿಕೆಯ ಕಾರಾಂಜ ಜಲಾಶಯ ಮೂಲದಿಂದ ಪಂಪು ಮಾಡಲು ಯೋಜನೆಯನ್ನು ರೂಪಿಸಿ ಅನುಷ್ಠಾನಗೊಳಿಸಲಾಗಿದೆ. ಈ ಯೋಜನೆ 2016 ರಲ್ಲಿ ಚಾಲನೆಗೊಳಿಸಲಾಗಿದೆ. |
| ಆ) | 2016-17ರ ಅವಧಿಯವರೆಗೆ ಚಾಲನೆಯಲ್ಲಿದ್ದ ಜನವಾಡ ಫಿಲ್ಟರ್‌ನಿಂದ ನೀರು ಸರಬರಾಜು ಹಠಾತ್ ಸ್ಥಗಿತಗೊಳಿಸಿರುವ ಹಿನ್ನೆಲೆಯಲ್ಲಿ ಈ ಸಮಸ್ಯೆ ಎದುರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಆದರೆ, 2014ರ ಬೇಸಿಗೆಯಲ್ಲಿ ಮಾಂಜ್ರಾ ನದಿಯ ಮೂಲದಲ್ಲಿ ನೀರು ಬತ್ತಿಹೋದ ಕಾರಣ, ಈ ಮೂಲದಿಂದ ನೀರು ಸರಬರಾಜು ವ್ಯವಸ್ಥೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯವರು ಸ್ಥಗಿತಗೊಳಿಸಿರುತ್ತಾರೆ. ಈ ಕಾರಣದಿಂದ ಸಗಟು ನೀರು ಸರಬರಾಜುವಿನಲ್ಲಿ ಕೊರತೆ ಉಂಟಾಗಿರುತ್ತದೆ.<br><br>ಈಗ ಕಾರಾಂಜ ಜಲಾಶಯ ಮೂಲ ಒಂದರಿಂದಲೇ 28 ಎಂಎಲ್‌ಡಿ ಪಂಪ್ ಮಾಡಲು ಸಾಮರ್ಥ್ಯವಿದ್ದರೂ ವಿದ್ಯುತ್ ವ್ಯತ್ಯಯ ಹಾಗೂ ಕುಸಿದ ಪಂಪ್ ಕಾರ್ಯಕ್ಷಮತೆ ಕಾರಣಗಳಿಂದ ಹಾಲಿ 22 ರಿಂದ 23 ಎಂಎಲ್‌ಡಿ ನೀರನ್ನು ಬೀದರ್ ನಗರಕ್ಕೆ ಪಂಪ್ ಮಾಡಲಾಗುತ್ತಿದೆ.<br><br>ಹಾಲಿ ಪಂಪು ಮಾಡುತ್ತಿರುವ 22 ರಿಂದ 23 ಎಂಎಲ್‌ಡಿ ನೀರನ್ನು ಬೀದರ್ ನಿವಾಸಿಗಳಿಗೆ 35 ವಾರ್ಡುಗಳ ಪೈಕಿ 2 ವಾರ್ಡುಗಳಾದ ಆಟೋನಗರ ಮತ್ತು ಅಂಬೇಡ್ಕರ್ ಕಾಲೋನಿಗಳಿಗೆ ಪ್ರತಿ ದಿನ 24 ಗಂಟೆ ಕುಡಿಯುವ ನೀರು ಪೂರೈಸುತ್ತಿದ್ದು, ಉಳಿದ 33 ವಾರ್ಡುಗಳಿಗೆ ದಿನ ಬಿಟ್ಟು ದಿನ (2 ದಿನಕೊಮ್ಮೆ) 3 ರಿಂದ 4 ಗಂಟೆ ಕುಡಿಯುವ ನೀರು ಸರಬರಾಜು ಮಾಡಲಾಗುತ್ತಿದೆ.<br><br>ಸಗಟು ನೀರಿನ ಕೊರತೆಯಿಂದ ನೀರು ಪೂರೈಕೆಯಲ್ಲಿ ವ್ಯತ್ಯಯವಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಇ) | ಈ ಯೋಜನೆ ಸ್ಥಗಿತಗೊಳಿಸಿರುವುದರಿಂದ ಬೀದರ್ ನಗರದ ಹಳೆ ನಗರಕ್ಕೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದಲ್ಲಿ ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಬೀದರ್ ಹಳೆ ನಗರದ ಬಾಗಕ್ಕೆ ಹಾಲಿ ಚಾಲ್ತಿಯಲ್ಲಿರುವ ಕಾರಾಂಜ ಜಲಾಶಯದ ಮೂಲದಿಂದಲೇ ಸರಬರಾಜು ಉತ್ತಮಪಡಿಸಲು ಹಾಲಿ ವ್ಯವಸ್ಥೆಯ ಕ್ಷೀಣವಾಗಿರುವ ಯಂತ್ರೋಪಕರಣಗಳ ಕಾರ್ಯಕ್ಷಮತೆ ಹೆಚ್ಚಿಸಲು ನಗರಸಭೆಯಿಂದ ರೂ.46.00 ಲಕ್ಷ ವೆಚ್ಚದಲ್ಲಿ ಕಾಮಗಾರಿ ಕೈಗೊಳ್ಳಲಾಗಿದೆ.<br><br>ಈ ಕಾಮಗಾರಿ ಪೂರ್ಣಗೊಂಡ ನಂತರ ಬೀದರ್ ನಗರಕ್ಕೆ ಸಗಟು ನೀರು ಸರಬರಾಜು 22 – 23 ಎಂಎಲ್‌ಡಿ ಯಿಂದ 28 ಎಂಎಲ್‌ಡಿ ಗೆ ಹೆಚ್ಚುವರಿಯಾಗುತ್ತದೆ. |

| | | |
|---|---|---|
| | | ಮುಂದುವರೆದಂತೆ, ಕಾರಾಂಜ ಮೂಲದಿಂದ ಅಂತಿಮವಾಗಿ 2046 ರ ಜನಸಂಖ್ಯೆಗೆ ಅವಶ್ಯವಿರುವ ಮಾರ್ಪಾಡುಗಳೊಂದಿಗೆ ಹೊಸ ಯಂತ್ರೋಪಕರಣಗಳನ್ನು ಅಳವಡಿಸಿ ಜಲಶುದ್ಧೀಕರಣಗಾರವನ್ನು 44 ಎಂಎಲ್‌ಡಿಗೆ ವಿನ್ಯಾಸಿಸಲಾಗಿದೆ.<br><br>2031 ಕ್ಕೆ ಮೇಲೆ ತಿಳಿಸಿರುವ ಮಾರ್ಪಾಡುಗಳನ್ನು ಮಾಡಿ ಅನುಷ್ಠಾನಗೊಳಿಸಬೇಕಾಗಿತ್ತು. ಆದರೆ, ಮಾಂಜ್ರಾ ಮೂಲದ ಬದಲು ಹೊಸ ಯೋತ್ರೋಪಕರಣಗಳು ಹಾಗೂ ಅದಕ್ಕೆ ಸಂಬಂಧಿಸಿದ ಇತರೆ ಕಾಮಗಾರಿಗಳನ್ನು ಈಗಲೇ ಮಾರ್ಪಡಿಸಿ ಹೆಚ್ಚುವರಿ ನೀರನ್ನು ಬೀದರ್ ನಗರಕ್ಕೆ ಪಂಪು ಮಾಡುವ ಕಾಮಗಾರಿಯ ಪ್ರಸ್ತಾವನೆಯು KUIDFC ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ. |
| ಈ) | ಸ್ಥಗಿತವಾದ ಈ ಯೋಜನೆಯನ್ನು ಪುನರ್ ಪರಿಶೀಲಿಸಿ ಮತ್ತೆ ಜನವಾಡ ಫಿಲ್ಟರ್‌ನ್ನು ಪುನ: ಪ್ರಾರಂಭಿಸಲಾಗುವುದೇ; ಪ್ರಾರಂಭಿಸುವುದಾದರೆ ಯಾವಾಗ ಪ್ರಾರಂಭಿಸಲಾಗುವುದು; ಇಲ್ಲದಿದ್ದಲ್ಲಿ ಕಾರಣಗಳನ್ನು ನೀಡುವುದು? | ಸ್ಥಗಿತಗೊಂಡಿರುವ ಜನವಾಡ ಫಿಲ್ಟರ್‌ನ ಯೋಜನೆಯನ್ನು ಪುನಃ ಪ್ರಾರಂಭಿಸಲು ಈ ಕೆಳಕಂಡ ಕಾರಣಗಳಿಂದ ಸಾಧ್ಯವಾಗುವುದಿಲ್ಲ.<br>1. ಸದರಿ ಯೋಜನೆಯ ನೀರಿನ ಮೂಲ ಮಂಜರಾ ನದಿಯ ಜನವಾಡ ಬ್ಯಾರೇಜ್ ಆಗಿದ್ದು, ಸದರಿ ಬ್ಯಾರೇಜ್ ಕುಸಿದಿರುವುದರಿಂದ ಶೇಖರಣಾ ಸಾಮರ್ಥ್ಯವು ಸಂಪೂರ್ಣವಾಗಿ ಕಡಿಮೆಯಾಗಿದೆ.<br>2. ಸದರಿ ಯೋಜನೆಯಡಿ ಅಳವಡಿಸಿರುವ ಪಿ.ಎಸ್.ಸಿ. ಕಚ್ಚಾ ನೀರು ಏರು ಕೊಳವೆ ಮಾರ್ಗ ಹಾಗೂ ಶುದ್ಧ ನೀರು ಏರು ಕೊಳವೆ ಮಾರ್ಗ ಹಾಳಾಗಿರುತ್ತದೆ.<br>3. ಜಾಕ್‌ವೆಲ್ ಮತ್ತು ಫಿಲ್ಟರ್ ಬೆಡ್‌ಗಳಲ್ಲಿ ಅಳವಡಿಸಲಾಗಿರುವ ಪಂಪಿಂಗ್ ಮಷಿನರಿಗಳ ವಿನ್ಯಾಸ ಅವಧಿ ಮುಗಿದಿದ್ದು ಕಾರ್ಯನಿರ್ವಹಿಸುತ್ತಿರುವುದಿಲ್ಲ.<br>4. ಫಿಲ್ಟರ್ ಬೆಡ್ ಸಹ ಕಾರ್ಯನಿರ್ವಹಿಸುತ್ತಿರುವುದಿಲ್ಲ. |

**ಕಡತ ಸಂಖ್ಯೆ: ನಅಇ 49 ಪಿ.ಆರ್.ಜೆ 2022**

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು